# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 44
ಸದಸ್ಯರ ಹೆಸರು : ಶ್ರೀ ಪ್ರಕಾಶ್ ಕೆ. ರಾಥೋಡ್ (ನಾಮ ನಿರ್ದೇಶನ ಹೊಂದಿದವರು)
ಉತ್ತರಿಸಬೇಕಾದ ದಿನಾಂಕ : 15.02.2022
ಉತ್ತರಿಸುವವರು : ಪೌರಾಡಳಿತ, ಸಣ್ಣ ಕೈಗಾರಿಕೆ ಹಾಗೂ ಸಾರ್ವಜನಿಕ ಉದ್ಯಮಗಳ ಸಚಿವರು.

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ವಿಜಯಪುರ ಜಿಲ್ಲೆಯಲ್ಲಿ ಎಷ್ಟು ಸಣ್ಣ ಕೈಗಾರಿಕಾ ವಸಾಹತುಗಳಿವೆ; (ತಾಲ್ಲೂಕುವಾರು ವಿವರ ನೀಡುವುದು) | ವಿಜಯಪುರ ಜಿಲ್ಲೆಯಲ್ಲಿ ಒಟ್ಟು 4 ಸಣ್ಣ ಕೈಗಾರಿಕಾ ವಸಾಹತುಗಳಿವೆ. ತಾಲ್ಲೂಕುವಾರು ವಿವರಗಳು ಈ ಕೆಳಗಿನಂತಿವೆ. |

| ಕ್ರ ಸಂ. | ತಾಲ್ಲೂಕು | ಕೈಗಾರಿಕಾ ವಸಾಹತುಗಳ ಸಂಖ್ಯೆ | ವಿವರ |
|---|---|---|---|
| 1 | ವಿಜಯಪುರ | 2 | ವಿಜಯಪುರ, ಮಹಾಲ್ ಭಗಾಯತ್ |
| 2 | ಮುದ್ದೇಬಿಹಾಳ | 1 | ಮುದ್ದೇಬಿಹಾಳ |
| 3 | ಸಿಂದಗಿ | 1 | ಸಿಂದಗಿ |

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಆ) | ಹೊಸದಾಗಿ ಸಣ್ಣ ಕೈಗಾರಿಕೆಗಳನ್ನು ಸ್ಥಾಪಿಸುವವರಿಗೆ ಸರ್ಕಾರದ ವತಿಯಿಂದ ನೀಡುತ್ತಿರುವ ಉತ್ತೇಜನಗಳಾವುವು; | **ಹೊಸದಾಗಿ ಸಣ್ಣ ಕೈಗಾರಿಕೆಗಳನ್ನು ಸ್ಥಾಪಿಸುವವರಿಗೆ ಮತ್ತು ಸಣ್ಣ ಕೈಗಾರಿಕೆಗಳನ್ನು ಉತ್ತೇಜಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳು ಈ ಕೆಳಗಿನಂತಿವೆ:** |
| ಇ) | ಸಣ್ಣ ಕೈಗಾರಿಕೆಗಳನ್ನು ಉತ್ತೇಜಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು? | 1. **ಕೇಂದ್ರ ಸರ್ಕಾರದ ಪ್ರಧಾನಮಂತ್ರಿಗಳ ಉದ್ಯೋಗ ಸೃಜನ ಯೋಜನೆಯಡಿ** ನಗರ ಮತ್ತು ಗ್ರಾಮೀಣ ಪ್ರದೇಶಗಳಲ್ಲಿ ಕೈಗಾರಿಕೆಗಳನ್ನು ಸ್ಥಾಪಿಸಲು ಗರಿಷ್ಠ ಸಾಲ ರೂ. 25 ಲಕ್ಷಗಳವರೆಗೆ ಬ್ಯಾಂಕ್‌ಗಳ ಮೂಲಕ ಸಾಲ ಸೌಲಭ್ಯ ಒದಗಿಸಿ ಸಣ್ಣ ಉದ್ಯಮಗಳನ್ನು ಸ್ಥಾಪಿಸಿ ಸ್ವಯಂ ಉದ್ಯೋಗ ಕೈಗೊಳ್ಳಲು ಅನುಕೂಲ ಒದಗಿಸಲಾಗುವುದು ಹಾಗೂ ಯೋಜನಾ ವೆಚ್ಚದ ಮೇಲೆ ಶೇ. 15 ರಿಂದ ಶೇ.35 ರವರೆಗೆ ಗರಿಷ್ಠ ರೂ.3.75 ಲಕ್ಷದಿಂದ ರೂ.8.75 ಲಕ್ಷದವರೆಗೆ ಸಹಾಯಧನ ನೀಡಲಾಗುತ್ತಿದೆ.<br>2. ಕರ್ನಾಟಕ ರಾಜ್ಯ ಹಣಕಾಸು ಸಂಸ್ಥೆಯ ಮೂಲಕ ಸೂಕ್ಷ್ಮ ಮತ್ತು ಸಣ್ಣ ಕೈಗಾರಿಕೆಗಳು ಸ್ಥಾಪಿಸಲು ರೂ.5.00 ಕೋಟಿಗಳವರೆಗೆ ಸಾಲ ಪಡೆದು ನಿಗದಿತ ಸಮಯದಲ್ಲಿ ಮರುಪಾವತಿ ಮಾಡಿದ ಅತಿ ಸಣ್ಣ ಮತ್ತು ಸಣ್ಣಕೈಗಾರಿಕಾ ಘಟಕಗಳಿಗೆ 5 ವರ್ಷಗಳ ಅವಧಿಗೆ ಶೇಕಡ 6 ರಂತೆ ಬಡ್ಡಿ ಸಹಾಯಧನ ನೀಡಲಾಗುವುದು.<br>3. ಪರಿಶಿಷ್ಟ ಜಾತಿಯ ಮತ್ತು ಪರಿಶಿಷ್ಟ ಪಂಗಡದ ಉದ್ಯಮಶೀಲರಿಗೆ ವಿಶೇಷ ಘಟಕ ಉಪಯೋಜನೆ ಮತ್ತು ಗಿರಿಜನ ಉಪ ಯೋಜನೆಯಡಿಯಲ್ಲಿ ಶೇ 75 ರಿಯಾಯಿತಿ ದರದಲ್ಲಿ ಕೈಗಾರಿಕಾ ನಿವೇಶನಗಳನ್ನು (ಗರಿಷ್ಠ 2 ಎಕರೆ) ಮತ್ತು ಶೇ 75 ರಿಯಾಯಿತಿ ದರದಲ್ಲಿ ಕೈಗಾರಿಕಾ ಶೆಡ್‌ಗಳನ್ನು ನೀಡಲಾಗುತ್ತಿದೆ.<br>4. ಪರಿಶಿಷ್ಟ ಜಾತಿಯ ಮತ್ತು ಪರಿಶಿಷ್ಟ ಪಂಗಡದ ಉದ್ಯಮಶೀಲರಿಗೆ ವಿಶೇಷ ಘಟಕ ಉಪಯೋಜನೆ ಮತ್ತು ಗಿರಿಜನ ಉಪಯೋಜನೆಯಡಿಯಲ್ಲಿ ಸ್ವಯಂಉದ್ಯೋಗ ಕೈಗೊಳ್ಳಲು ಬ್ಯಾಂಕಿನಿಂದ ಸಾಲ ಒದಗಿಸಿ ಯೋಜನಾ ವೆಚ್ಚದ ಮೇಲೆ ಶೇ 60 ರಷ್ಟು ಗರಿಷ್ಠ ರೂ.5.00 ಲಕ್ಷ ಸಹಾಯಧನ ನೀಡಲಾಗುತ್ತಿದೆ.<br>5. ಪರಿಶಿಷ್ಟ ಜಾತಿಯ ಮತ್ತು ಪರಿಶಿಷ್ಟ ಪಂಗಡದ ಮೊದಲ ಪೀಳಿಗೆಯ ಉದ್ಯಮಿದಾರರು ಬ್ಯಾಂಕ್/ ಹಣಕಾಸು ಸಂಸ್ಥೆಗಳಿಂದ ಸಾಲ ಪಡೆದು ಸ್ಥಾಪಿಸುವ ಹೊಸ ಘಟಕಗಳಿಗೆ ಗರಿಷ್ಠ ರೂ.5.00 ಕೋಟಿ ಯೋಜನಾ ವೆಚ್ಚದಲ್ಲಿ The Debt Equity Ratio 2:1 ಪ್ರಕಾರ |

(2/3 ರಷ್ಟು ಬ್ಯಾಂಕ್/ ಹಣಕಾಸು ಸಂಸ್ಥೆಗಳಿಂದ ಸಾಲ ಮತ್ತು 1/3 ಪ್ರವರ್ತಕರ ಬಂಡವಾಳ) ಘಟಕಕ್ಕೆ ಪ್ರವರ್ತಕ ಬಂಡವಾಳ ಹೂಡಿಕೆಯ 1/3 ರಲ್ಲಿ ಶೇ.50 ರಷ್ಟು ಬಡ್ಡಿರಹಿತ ಗರಿಷ್ಟ ರೂ.75 ಲಕ್ಷ ಸಾಫ್ಟ್ ಸೀಡ್ ಕ್ಯಾಪಿಟಲ್‌ಆರ್ಥಿಕ ಸಹಾಯ ನೀಡಲಾಗುತ್ತಿದೆ.

6. ದಿನಾಂಕ:01-04-2017 ರಿಂದ ಮೊದಲ ಬಾರಿಗೆ ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದವರು ಸ್ಥಾಪಿಸುವ ಸಣ್ಣ ಮತ್ತು ಅತೀ ಸಣ್ಣ ಘಟಕಗಳು ಸಾಲ ಪಡೆಯುವ ಸಂದರ್ಭದಲ್ಲಿ ಕೆಎಸ್.ಎಫ್.ಸಿ ಮತ್ತು ಇತರೇ ಹಣಕಾಸು ಸಂಸ್ಥೆಯವರು ವಿಧಿಸಿರುವ ಪರಿಷ್ಕರಣಾ ಶುಲ್ಕ, ಕಾನೂನು ಶುಲ್ಕ, ಏಕಕಾಲಿಕ ಸಾಲ ವಿತರಣಾ ಶುಲ್ಕ ಮತ್ತು ಇತರೆ ಶುಲ್ಕಗಳನ್ನು ಭರಿಸಲಾಗುತ್ತಿದೆ.

7. ಕರ್ನಾಟಕ ರಾಜ್ಯ ಕೈಗಾರಿಕಾ ನೀತಿ 2020-25 ರಂತೆ ಕೆಳಕಾಣಿಸಿದ ಪ್ರೋತ್ಸಾಹ ಮತ್ತು ರಿಯಾಯಿತಿ ಸೌಲಭ್ಯಗಳನ್ನು ಅರ್ಹ ಕೈಗಾರಿಕೆಗಳಿಗೆ ನೀಡಿ ಉತ್ತೇಜಿಸಲಾಗುತ್ತಿದೆ.
   1. ಬಂಡವಾಳ ಹೂಡಿಕೆ ಸಹಾಯಧನ
   2. ಮುದ್ರಾಂಕ ಶುಲ್ಕ ವಿನಾಯಿತಿ
   3. ನೋಂದಣಿ ಶುಲ್ಕ ರಿಯಾಯಿತಿ ಪ್ರಮಾಣಪತ್ರ
   4. ಭೂಪರಿವರ್ತನಾ ಶುಲ್ಕ ಮರುಪಾವತಿ ಸಹಾಯಧನ
   5. ವಿದ್ಯುತ್ ಸಹಾಯಧನ
   6. ವಿದ್ಯುತ್ ತೆರಿಗೆ ವಿನಾಯಿತಿ ಪ್ರಮಾಣಪತ್ರ
   7. ತ್ಯಾಜ್ಯ ನೀರು ಸಂಸ್ಕರಣಾ ಘಟಕ ಸ್ಥಾಪನೆ ಸಹಾಯಧನ
   8. ರಫ್ತು ಘಟಕಗಳಿಗೆ ಪ್ರೋತ್ಸಾಹಗಳು
   9. ತಾಂತ್ರಿಕ ಉನ್ನತೀಕರಣ, ಗುಣಮಟ್ಟ ಪ್ರಮಾಣ ಪತ್ರ ಸಹಾಯಧನ
   10. ಮಳೆ ನೀರು ಕೊಯ್ಲು / ಸಂರಕ್ಷಣೆ ಸಹಾಯಧನ
   11. ತಂತ್ರಜ್ಞಾನ ಉನ್ನತೀಕರಣಕ್ಕೆ ಬಡ್ಡಿ ಸಹಾಯಧನ

ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯು ನಿರುದ್ಯೋಗಿ ಪದವೀಧರರು ಸ್ವಯಂ ಉದ್ಯೋಗ ಪ್ರಾರಂಭಿಸುವ ಬಗ್ಗೆ ಮಾರ್ಗದರ್ಶನ ನೀಡಲು ಮತ್ತು ಕೈಗಾರಿಕೆಗಳನ್ನು ಪ್ರಾರಂಭಿಸುವ ಬಗ್ಗೆ ಅನೇಕ ಕಾರ್ಯಕ್ರಮಗಳನ್ನು ನಡೆಸಲಾಗುತ್ತಿದೆ.

ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯು ದಿನಾಂಕ 11/10/2021 ರಂದು ಬೆಂಗಳೂರು ಅರಮನೆಯಲ್ಲಿ "ಉದ್ಯಮಿಯಾಗು, ಉದ್ಯೋಗ ನೀಡು" ಎನ್ನುವ ಜಾಗೃತಿ ಕಾರ್ಯಕ್ರಮವನ್ನು ಅಂತಿಮ ವರ್ಷದ ಇಂಜಿನಿಯರಿಂಗ್, ವೈದ್ಯಕೀಯ ಮತ್ತು ಎಂ.ಬಿ.ಎ ಪದವೀಧರರಿಗೆ ನಡೆಸಿತು. ಈ ಕಾರ್ಯಾಗಾರದಲ್ಲಿ ಬೆಂಗಳೂರು ನಗರ, ಬೆಂಗಳೂರು ಗ್ರಾಮಾಂತರ, ಕೋಲಾರ, ಚಿಕ್ಕಬಳ್ಳಾಪುರ ಮತ್ತು ರಾಮನಗರ ಜಿಲ್ಲೆಗಳ ಸುಮಾರು 9000 ವಿದ್ಯಾರ್ಥಿಗಳು ಪಾಲ್ಗೊಂಡಿದ್ದರು.

ಮುಂದುವರೆದು, ಇದೇ ಕಾರ್ಯಕ್ರಮವನ್ನು ಕಲಬುರಗಿಯಲ್ಲಿ 3/1/2022 ರಂದು ಜರುಗಿಸಲಾಗಿದೆ. ಈ ಕಾರ್ಯಕ್ರಮದಲ್ಲಿ ಬೀದರ್, ಕಲಬುರಗಿ, ಯಾದಗಿರಿ, ರಾಯಚೂರು, ಬಳ್ಳಾರಿ, ಕೊಪ್ಪಳ ಮತ್ತು ವಿಜಯನಗರ ಜಿಲ್ಲೆಗಳ ಅಂತಿಮ ವರ್ಷದ ಇಂಜಿನಿಯರಿಂಗ್, ವೈದ್ಯಕೀಯ ಮತ್ತು ಎಂ.ಬಿ.ಎ ವಿದ್ಯಾರ್ಥಿಗಳು ಭೌತಿಕವಾಗಿ ಮತ್ತು ಆನ್‌ಲೈನ್ ಮುಖಾಂತರ ಪಾಲ್ಗೊಂಡಿದ್ದರು. ಇದೇ ರೀತಿಯಾಗಿ ಬೆಳಗಾವಿ, ಮೈಸೂರು, ಮಂಗಳೂರು ಮತ್ತು ತುಮಕೂರುಗಳಲ್ಲಿ ನಡೆಸಲು ಪ್ರಸ್ತಾಪಿಸಲಾಗಿದೆ.

ಇದಲ್ಲದೇ ಜಿಲ್ಲಾ ಮಟ್ಟದಲ್ಲಿಯೂ ಸಹ ಜಾಗೃತಿ ಕಾರ್ಯಕ್ರಮಗಳನ್ನು ನಡೆಸಲಾಗುತ್ತಿದೆ.

**ಸಿಐ 31 ಸಿಎಸ್‌ಸಿ 2022**

(ಎನ್. ನಾಗರಾಜು (ಎಂ.ಟಿ.ಬಿ))
ಪೌರಾಡಳಿತ ಮತ್ತು ಸಣ್ಣ ಕೈಗಾರಿಕೆ
ಹಾಗೂ ಸಾರ್ವಜನಿಕ ಉದ್ದಿಮೆಗಳ ಸಚಿವರು.